# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | :: | 275 |
| ಸದಸ್ಯರ ಹೆಸರು | :: | ಶ್ರೀ ಹೆಚ್.ಎಂ. ರಮೇಶಗೌಡ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | :: | 09.12.2020 |
| ಉತ್ತರಿಸುವ ಸಚಿವರು | :: | ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| (ಅ) | 2005 ರಲ್ಲಿ ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಪ್ರಾರಂಭವಾಗಿದ್ದರೂ ಸಹ ಬೋರ್ಡ್ ಆಫ್ ಮ್ಯಾನ್ಯೇಜಮೆಂಟ್‌ನಲ್ಲಿ ಮಾನ್ಯ ಶಾಸಕರುಗಳನ್ನು ನಾಮ ನಿರ್ದೇಶನ ಮಾಡಲು ಅವಕಾಶ ಕಲ್ಪಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು, ಬಂದಿರುತ್ತದೆ. |
| (ಆ) | ಬಂದಿದ್ದಲ್ಲಿ, ಮಾನ್ಯ ಶಾಸಕರುಗಳನ್ನು ನಾಮ ನಿರ್ದೇಶನ ಮಾಡುವ ಬಗ್ಗೆ ಸರ್ಕಾರದ ನಿಲುವೇನು; | ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯದ ಬೋರ್ಡ್ ಆಫ್ ಮ್ಯಾನೇಜಮೆಂಟ್‌ಗೆ ಮಾನ್ಯ ಶಾಸಕರುಗಳನ್ನು ನಾಮ ನಿರ್ದೇಶನ ಮಾಡಲು ವಿಶ್ವವಿದ್ಯಾಲಯದ ಅಧಿನಿಯಮದಲ್ಲಿ ಅವಕಾಶವಿರುವುದಿಲ್ಲ. |
| (ಇ) | ಮಂಗಳೂರು ಮೀನುಗಾರಿಕೆ ಮಹಾವಿಶ್ವವಿದ್ಯಾಲಯದಲ್ಲಿ AICRP ಯೋಜನೆಯ ಅನುಷ್ಠಾನದಲ್ಲಿ ಆಗಿರುವ ಲೋಪದೋಷಗಳು ಸರ್ಕಾರದ ಗಮನಕ್ಕೆ ಬಂದಿವೆಯೇ; | ಐಸಿಎಆರ್-ಏಐಸಿಆರ್‌ಪಿ ಹಾಗೂ ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಶ್ವವಿದ್ಯಾಲಯದ ನಡುವೆ ಅನುಮೋದನೆಗೊಂಡಿರುವ ಒಡಂಬಡಿಕೆಯ ಪ್ರಕಾರವೇ ಮಂಗಳೂರು ಮೀನುಗಾರಿಕೆ ಮಹಾವಿದ್ಯಾಲಯದಲ್ಲಿ AICRP ಯೋಜನೆಯು ಕಾರ್ಯನಿರ್ವಹಿಸುತ್ತಿದ್ದು ಅನುಷ್ಠಾನದಲ್ಲಿ ಯಾವುದೇ ಲೋಪದೋಷಗಳು ಕಂಡು ಬಂದಿರುವುದಿಲ್ಲ. |
| (ಈ) | ಲೋಕಸಭಾ ಚುನಾವಣೆಯ ಮಾದರಿಯ ನೀತಿ ಸಂಹಿತೆ ಇದ್ದಾಗಲೂ ಸಹ ಪತ್ರಿಕಾ ಪ್ರಕಟಣೆ ನೀಡದೇ 2019 ರಲ್ಲಿ AICRP ಯೋಜನೆಯಡಿಯಲ್ಲಿ ನಿಯಮಬಾಹಿರವಾಗಿ ವಿಜ್ಞಾನಿ ಹಾಗೂ ತಾಂತ್ರಿಕ ಸಿಬ್ಬಂದಿಗಳನ್ನು ನೇಮಿಸಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೇಂದ್ರ ಸರ್ಕಾರವು ಮಾರ್ಚ್ 2019ರಲ್ಲಿ ಹೊರಡಿಸಲಾದ ಮಾದರಿ ನೀತಿ ಸಂಹಿತೆ ಮಾರ್ಗಸೂಚಿಗಳ ಪ್ರಕಾರ ಶಾಸನಬದ್ಧ ಸಂಸ್ಥೆಗಳಲ್ಲಿ ಸಿಬ್ಬಂದಿ ನೇಮಕಾತಿಗೆ ಸಡಿಲಿಕೆಯನ್ನು ನೀಡಲಾಗಿರುತ್ತದೆ ಅದರಂತೆ ಪ್ರಕಾರವಾಗಿಯೇ ಯೋಜನೆಯಡಿಯಲ್ಲಿ ತಾತ್ಕಾಲಿಕವಾಗಿ ವಿಜ್ಞಾನಿ/ ತಾಂತ್ರಿಕ ಸಿಬ್ಬಂದಿ ನೇಮಕವಾಗಿರುತ್ತದೆ. ಅಲ್ಲದೇ, ನೇಮಕಾತಿಯ ಆದೇಶವನ್ನು ಮಾದರಿ ನೀತಿ ಸಂಹಿತೆ ಮುಕ್ತಾಯಗೊಂಡ ನಂತರ ನೀಡಲಾಗಿದೆ. ಭಾರತೀಯ ಕೃಷಿ ಅನುಸಂಧಾನ ಸಂಸ್ಥೆಯ ಅಖಿಲ ಭಾರತ ಸಹ-ಸಂಘಟಿತ ಸಂಶೋಧನಾ ಯೋಜನೆ (ಕೊಯ್ಲೋತ್ತರ ಅಭಿಯಂತರು ಮತ್ತು ತಂತ್ರಜ್ಞಾನ ವಿಭಾಗ) ಯೋಜನೆಯು 2010 ರಿಂದಲೂ |

| | | |
|---|---|---|
| | | ನಿರಂತರ ಸೂತ್ರದಲ್ಲಿ ನಡೆದುಕೊಂಡು ಬರುತ್ತಿರುವುದರಿಂದ ಕೇಂದ್ರ ಸರ್ಕಾರದ ಅಂಗ ಸಂಸ್ಥೆಯಾಗಿರುವ ಭಾರತೀಯ ಕೃಷಿ ಅನುಸಂಧಾನ ಸಂಸ್ಥೆಯ (ಭಾ.ಕೃ.ಅ.ಸಂಸ್ಥೆ) ಭಾಗವಾಗಿರುವ ಭಾ.ಕೃ.ಅ.ಸಂ ಅಖಿಲ ಭಾರತ ಸಹ-ಸಂಘಟಿತ ಸಂಶೋಧನಾ ಯೋಜನೆ (ಕೋಯ್ಲಿನೋತ್ತರ ಅಭಿಯಂತರು ಮತ್ತು ತಂತ್ರಜ್ಞಾನ ವಿಭಾಗ ), ಸೆಂಟ್ರಲ್ ಇನ್ಸ್ಟಿಟ್ಯೂಟ್ ಆಫ್ ಪೋಸ್ಟ್ ಹಾರ್ವೆಸ್ಟ್ ಇಂಜಿನೀಯರಿಂಗ್ ಅಂಡ್ ಟೆಕ್ನಾಲಜಿ (ಸಿ.ಐ.ಪಿ.ಹೆಚ್.ಇ.ಟಿ), ಲೂಧಿಯಾನಾ. ಪಂಜಾಬ್‌ನ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವುದರಿಂದ 2019ರಲ್ಲಿ ನಡೆದ ಭಾ.ಕೃ.ಸಂ.ಮಂ- ಅಖಿಲ ಭಾರತ ಸಹ-ಸಂಘಟಿತ ಸಂಶೋಧನಾ ಯೋಜನೆ (ಕೋಯ್ಲಿನೋತ್ತರ ಅಭಿಯಂತರು ಮತ್ತು ತಂತ್ರಜ್ಞಾನ ವಿಭಾಗ) ಯೋಜನೆಯ ಕಾರ್ಯಾಗಾರ/ವಾರ್ಷಿಕ ತಾಂತ್ರಿಕ ಸಭೆಯ ನಡವಳಿಯ ಪ್ರಕಾರ ವಿಶ್ವವಿದ್ಯಾಲಯವು AICRP ಯೋಜನೆಯ ಖಾಲಿ ಹುದ್ದೆಗಳನ್ನು ತುಂಬಲಾಗದಿದ್ದಲ್ಲಿ ಸದರಿ ಖಾಲಿ ಹುದ್ದೆಗಳನ್ನು ರದ್ದುಪಡಿಸಲಾಗುವುದಾಗಿ ಷರತ್ತನ್ನು ವಿಧಿಸಲಾಗಿತ್ತು. ಅದ್ದರಿಂದ ತಾತ್ಕಾಲಿಕವಾಗಿ ಸಮವ್ಯಾಪಕ (co-terminus) ಅಡಿಯಲ್ಲಿ ನೇಮಕಾತಿ ಮಾಡಿಕೊಳ್ಳಲಾಗಿದೆ. |

ಸಂಖ್ಯೆ: ಪಸಂಮೀ ಇ-264 ಪಲಸೇ 2020

(ಪ್ರಭು ಬಿ. ಚವ್ಹಾಣ್)
ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು